# ಜ್ಯೇಷ್ಠ ಮಾಸ

**ಜ್ಯೇಷ್ಠೇ ಸ್ವಾತಿಭವಂ ವಿಷ್ಣುಂ**

ಜ್ಯೇಷ್ಠೇ ಸ್ವಾತಿಭವಂ ವಿಷ್ಣುಂ ರಥಾಂಶಂ ಧ್ವನಿ ನಃ ಪುರೇ।
ಪ್ರಪದ್ಯೇ ಶ್ವಶುರಂ ವಿಷ್ಣೋರ್ ವಿಷ್ಣು ಚಿತ್ತಂ ಪುರಃ ಶಿಖಂ।।ಪೆರಿಯಾಳ್ವಾರ್।।

**ಜಲಜೇಷ್ಠ ವಿಭಾಕಾರಂ ಜಗದೀಶ**

ಜಲಜೇಷ್ಠ ವಿಭಾಕಾರಂ ಜಗದೀಶ ಪದಾಶ್ರಯಂ। ಜಗತೀತಲವಿಖ್ಯಾತಂ ಜಗನ್ನಾಥ ಗುರುಂ ಭಜೇ।।



## 19 "ಶ್ರೀ ತ್ರಿವಿಕ್ರಮ" ಮಾಸನಿಯಾಮಕ

ತ್ರಿವಿಕ್ರಮ ವಿಕ್ರಮ ನಿಷ್ಕ್ರಮ ವಂದೇ। ಸುಕ್ರಮ ಸಂಕ್ರಮ ಹುಂಕೃತವಕ್ತ್ರ।।

ತ್ರಿವಿಕ್ರಮ ತ್ರಿವಿಕ್ರಮ ಎಂದರೆ। ಸ್ವರ್ಗ ಮರ್ತ್ಯ ಪಾತಾಳವನ್ನು ಆಕ್ರಮಿಸಿ ಕೊಂಡಿದ್ದರಿಂದ।
ತ್ರಿವಿಕ್ರಮನೆನಿಸಿಕೊಂಡಿ ।।ಕೇಶವಾಯ ನಮಃ।।

ತ್ರಿವೇಣಿಯಲ್ಲಿ ತ್ರಿವಿಕ್ರಮನಿದ್ದಾನೆ ರಾಮ ರಾಮ। ತ್ರಿವಿಕ್ರಮನ ದಯದಿಂದೆ
ತ್ರಿವೇಣಿಯಲ್ಲಿ ಮಿಂದೆ ರಾಮರಾಮ ।।ಕಾಶಿಯ ಹಾದಿಯಲಿ।।

ತ್ರಿವಿಕ್ರಮ ತ್ರೈಲೋಕನಾಥ। ದೇವ। ತ್ರಿಪುರರ ಸತಿಯರ ವಿಘಾತ। ಯದು ವಂಶ ಪಾಂಡವಪ್ರೀತ।
ಎನ್ನ ಹೃದಯದೊಳಗಿಹ ಶ್ರೀ ಜಗನ್ನಾಥ।।ಅಚ್ಯುತಾನಂತ।।

ಕವಿದು ಕೊಂಡು ಇರುವ ಪಾಪ ಸವೆದು ಹೋಗುವಂತೆ ಮಾಡಿ।
ಜವನ ಬಾಧೆಯನ್ನು ಬಿಡಿಸೊ ಶ್ರೀತ್ರಿವಿಕ್ರಮ ।।ಈಶ ನಿನ್ನ।।

ತ್ರಿವಿಕ್ರಮಂ ತಪೋಮೂರ್ತಿಂ। ತ್ರಿವಿದಾಘೌಘನಾಶನಂ । ತ್ರಿಸ್ಥಲಂ ತೀರ್ಥರಾಜೇಂದ್ರಂ।
ತಂ ವಂದೇ ತುಲಸೀಪ್ರಿಯಂ ।।ಓಂ ನಮೋ ಭಗವತೇ।।

ಚಕ್ರಭೂತಳದಲ್ಲಿ ಚಕ್ರವ ಪಿಡಿದನೆ। ಅಕ್ರೂರನೊಡನೆ ಮಥುರೆಗೆ
ಅಕ್ರೂರನೊಡನೆ ಮಥುರೆಗೆ ಪೋದ ಶ್ರೀಕೃಷ್ಣ। ತ್ರಿವಿಕ್ರಮ ನಮ್ಮ ಮನೆದೈವ ।।ರಂಗ ಬಾರೋ।।

ಉಂದನ್ ಸೆಯಲ್ ನೆರೆಯೆಯುಂ ಅರಿವಳಿಯೆಯುಂ ಎನಕ್ಕುಣರ್ತ। ಫಲ ಅವತಾರಂ ಎಡುತ್ತಾಯ್।
ಎಡುತ್ತುರೈತ್ತಾಯ್ । ಅದುವೇ ವಾಳ್ವಿನ್ ಆಧಾರಂ। ಅರುಳ್‌ತರುಂ ದೇವಾ। ವರಂತರ ವಾವಾ। ಮೂ
ಉಲಗೆಯುಂ ಅಳಕ್ಕಿನ್ರ ತ್ರಿವಿಕ್ರಮ ರೂಪಾ।।

**ತದ್ವಾಮನಂ ರೂಪಮುವರ್ಧತಾದ್ಭುತಂ**

ತದ್ವಾಮನಂ ರೂಪಮುವರ್ಧತಾದ್ಭುತಂ। ಹರೇಃ ಅನಂತಸ್ಯ ಗುಣತ್ರಯಾತ್ಮಕಂ। ಭೂಃ ಖಂ ದಿಶಃ ದ್ಯೌರ್ವಿವರೋ ಪಯೋಧಯಃ। ತಿರ್ಯಚ ನೃದೇವಾಃ ಋಷಯೋ ಯದಾಸತ।। ಹೃದಂಗ ಧರ್ಮಂ ಸ್ತನರ್ಯೋರ್ಮುರಾರೇ। ಋತಃಚ ಸತ್ಯಂ ಚ ಮನಸ್ಯ ಥೇಂದುಂ। ಶ್ರಿಯಂಚ ವಕ್ಷಸ್ಯರವಿಂದ ಹಸ್ತಾಂ। ಕಂಠೋ ಚ ಸಾಮಾನಿ ಸಮಸ್ತ ರೇಫಾನ್।

ತ್ರಿವಿಕ್ರಮೊ ವಿಜಯತೇ ತ್ರಯೀ ವಿಖ್ಯಾತ ವಿಕ್ರಮಃ। ಸಗದೋಪಿಹ್ಯಸೌದೇವಃ ಸಂಸಾರೇ ಗದತಾಂ ಅಗಾತ್॥

### ತ್ರಿವಿಕ್ರಮನ ವಿಕ್ರಮಂ

ತ್ರಿವಿಕ್ರಮನ ವಿಕ್ರಮಂ ಗಣಿಯಿತುಂ ಫಣಿಶಕ್ನುತೇ। ತವೇಶನತವೇ ಪಥು ಪ್ರಶಮನಂ ಪರೇಕಿಂ ಪುನಃ। ಅಜಾಂಡಂ ಘನಭಾಂಡ ಖಂಡನ ಪಟೀಯಸೀ ಯನ್ಮೃದು। ಪ್ರದೀಪ್ತನಿಗೆ ಮೋಕ್ಷಪನ್ನಖ ಶಿಖಾ ಜಗತ್ವ್ಯಾಪಿನೀ॥

### ತ್ರಿವಿಕ್ರಮಂ ರಮ್ಯಗದಾರಿ ಶಂಖ

ತ್ರಿವಿಕ್ರಮಂ ರಮ್ಯಗದಾರಿ ಶಂಖ-। ಸರೋಜ ಮಾಲಾಧರಮಿಂದು ವರ್ಣಮ್। ಮನೋಹರಾಂಗಂ ಯತಿ ವಾದಿರಾಜ। ಪ್ರತಿಷ್ಠಿತಂ ನೌಮಿ ಸದಾ ಪ್ರಸನ್ನಮ್॥



## 20. ವಟಸಾವಿತ್ರಿ ವ್ರತ:

### ಜಗದ್ಪೂಜೇ ಜಗನ್ಮಾತಃ (ಧ್ಯಾನಮಂತ್ರ)

ಜಗದ್ಪೂಜೇ ಜಗನ್ಮಾತಃ ಸಾವಿತ್ರೀ ಪತಿ ದೈವತೇ। ಪತ್ಯಾಸಹ ಅವಿಯೋಗಂ ಮೇ ವಟಸ್ಥೇ ಕುರುತೇ ನಮಃ॥

### ಓಂಕಾರ ಪೂರ್ವಿಕೇ ದೇವಿ

ಓಂಕಾರ ಪೂರ್ವಿಕೇ ದೇವಿ ವೀಣಾ ಪುಸ್ತಕಧಾರಿಣೀ। ವೇದಗರ್ಭೇ ನಮಸ್ತೇಸ್ತು ಅವೈಧವ್ಯಂ ಪ್ರಯಚ್ಛಮೇ। ಸಾವಿತ್ರೀ ತ್ವಂ ಯಥಾದೇವಿ ಚತುರ್ವರ್ಷಶತಾಯುತಾಂ। ಪತಿಂ ಪ್ರಾಪ್ತಿ ಗುಣಿನಂ ಮಮದೇವಿ ತಥಾ ಕುರು॥

### ಶ್ರೀ ಗಿರೀಂದ್ರ ಸುತಾ ಸುಪುತ್ರನೆ (ಸಾವಿತ್ರಿ ಚರಿತ್ರೆಯಿಂದ)

ಶ್ರೀ ಗಿರೀಂದ್ರ ಸುತಾ ಸುಪುತ್ರನೆ। ನಾಗ ಸುರ ನರ ನುತ ಚರಿತ್ರನೆ। ಭೋಗಿ ಭೂಷ ಪ್ರೇಮ ಪಾತ್ರನೆ ಭೋಗಮೋಕ್ಷದನೆ। ಯೋಗಿಜನ ಹೃದಯಾಬ್ಜಮಿತ್ರನೆ। ವಾಗಗೋಚರ ಗುಣ ಪವಿತ್ರನೆ। ರಾಗದಿಂದಲಿ ಸಲಹು ಸನ್ಮತಿ ಇತ್ತು ಗಜಮುಖನೆ॥ ಸಿರಿಗೆ ತೌರೂರಹ ಮಹೀಸುರ। ಪುರದಿ ಸಿಂಹಾಸನದಿ ಮಂಡಿಸಿ। ಪರಮಧರ್ಮದಿ ಪಾಲಿಸುತ ಕರ್ನಾಟಜನಪದವ। ಮೆರೆಯುತಿರ್ಪ ನುದಾರನಾಶ್ರಿತ। ಭರಣ ಸುಗುಣಾ ಭರಣ ವಿದ್ಯಾ। ಶರಧಿ ವರ್ಧನ ಚಂದ್ರ ಸುಯಶಸ್ತ್ಯಾಂದ್ರ ಚಾಮೇಂದ್ರ॥ ಬಾಲಿಕಾ ಜನಕವನಿತಲದೊಲು ಮೇಲೆನಿಪ ಪತಿಭಕ್ತಿ ಮುಖ್ಯಸು ಶೀಲಗಳ ಬೋಧಿಸುವ ಸಾವಿತ್ರಿಯ ಮಹಾಕಥೆಯ। ಕೇಳಿದೊಡನೆಯೆ ಮನವು ಹಿಡಿಯುವ ಪೋಲುತಿಳಿಗನ್ನಡದ ನುಡಿಯೊಳು। ಪೇಳಿ ನೀವೇನ್ನುತ ಕರಂ ಪ್ರೋತ್ಸಾಹ ಪಡಿಸಲ್ಕೆ॥ ಆ ಮಹಾ ಭಾರತದೊಳೆಸೆವು। ದ್ದಾಮ ಪಾತಿವ್ರತ್ಯ ಸದ್ಗುಣ ಭಾಮೆಯಹ ಸಾವಿತ್ರಿಯ ಮಹಾ ಪುಣ್ಯ ಚರಿತೆಯನು। ಭಾಮಿನಿ ಷಟ್ಪದಿಗಳಿಂದಭಿರಾಮವೆನೆ ಕನ್ನಡದಿ ಪೇಳ್ದನು। ಚಾಮನೃಪನಾಸ್ಥಾನಕವಿ ಬಸವಪ್ಪ ಶಾಸ್ತ್ರಿ ಇದ॥ ಆಯುಧಿಷ್ಠಿರ ನೃಪತಿ ಮಾರ್ಕಂಡೇಯಮುನಿ ಸಂಕ್ಷೇಪದಲಿ ರಾಮಾಯಣವ ಕೇಳ್ದೊಡನೆ ಸಾವಿತ್ರಿಯ ಮಹಾಕಥೆಯ ಪ್ರೀಯದಿಂ ವಿಸ್ತರಿಸಿ ಪೇಳುವೆ। ರಾಯಕೇಳೆಂದೆನುತ ವೈಶಂ। ಪಾಯನನು ಜನಮೇಜಯಕ್ಷಿತಿನಾಥ ಗಿಂತೆಂದ॥ ಕೇಳು ಧರ್ಮಜ ಮದ್ರದೇಶವನಾಳುತಿರ್ದನು। ಓರ್ವನವನೀ ಪಾಲಪುಂಗವನಶ್ವಪತಿಯೆಂದೆಂಬ ಪ್ರಾರ್ಥಿವನು ಪೇಳಲೇನವನಖಿಳ ಸದ್ಗುಣಶಾಲಿ। ನೀತಿ ವಿಶಾರದನು ಸುವಿಶಾಲ ಕೀರ್ತಿಪರೇಂಗೀತಜ್ಞನುದಾರ ಮತಿಯುತನು॥ ಸತ್ಯಸಂಧ ಜಿತೇಂದ್ರಿಯನು ದುಷ್ಕೃತ್ಯ ವಿಮುಖನು ಬ್ರಾಹ್ಮಣಪ್ರಿಯ ನಿತ್ಯಥಿಕವಿನಯಾನ್ವಿತನು ಲೋಕೋಪಕೃತಿರತನು। ನಿತ್ಯದೇವಾರ್ಚನ ಪರನು ಸಾಹಿತ್ಯವಿದನಾ ನೃಪತಿ ಯೋಗ್ಯಾ। ಮಾತ್ಯರೊಡನವನಿಯನು ಪಾಲಿಸುತಿರ್ದನೊಲವಿನಲಿ॥ ಕೇಳು ಜನಪತಿ ತನ್ನೃಪನ ಸತಿ। ಮಾಳವೀ ನಾಮದಲಿ ಮೆರೆವಳು ಹೋಲಿಸಲು ಸೌಂದರ್ಯದೊಳು ಶ್ರೀದೇವಿ ಗೆಣೆಯಹಳು।

ಪೇಳಲಸದಳವವಳ ಗುಣವಸುಶೀಲೆ ಪತಿಗನುಕೂಲೆಯಾಶ್ರಿತ ಪಾಲೆ ಗುಣಮಣಿ ಮಾಲೆ ಕರುಣಾವಾಲೆಯಾಲೋಲೆ।। ಜನಪಕೇಳಾಕಾಂತೆ ಮಕ್ಕಳು ತನಗುದಿಸಲಿಲ್ಲೆಂದು ಚಿಂತಾ ವನಧಿಯೋಳು ಮಿಗೆ ಮುಳುಗಿಹುದ ನರಿದವ ನಿಪತಿತಾನು। ಇನಿಯಳನು ಬೆಸಗೊಂಡ ನೇತಕೆ ಮನದ ದುಗುಡವಿದೆಂದು ಬಳಿಕಾ ವನಿತೆ ಕಂಬನಿದುಂಬಿನುಡಿದಳು ತನ್ನ ಪತಿಯೊಡನೆ।। ಭೂವ ಧೂವಲ್ಲಭನೆನಿನ್ನನು ಕೈಪಿಡಿದ ನನಗೇನು ಕೊರತೆ ಮಹಾವಿಭವದೊಳು ಬಾಳ್ವೆ ನಾದೊಡೆ ಮೇನ ನುಸಿರುವೆನು। ಭೂರಿನುತನಹ ಸುತನ ಪಡೆದು ಮನೋವಿನೋದವನಾಂಪ ಪುಣ್ಯವ ನಾವು ತರಲಿಲ್ಲೆನುತ ಕಂಬನಿದುಂಬಿದಳು ಕಾಂತೆ।। ತೂಗು ತೊಟ್ಟಿಲೊಳಿಟ್ಟು ಮಗುವನು ಜೋಗುಳವ ಪಾಡುತ್ತ ಮಲಗಿಸಿ ರಾಗದಿಂ ಮನೆಗೆಲಸಗಳ ಮಾಳ್ಪನಿತರೊಳಗೆ।। ಕೋಗಿಲೆಯ ದನಿಯಣುಗನಳಿ ಲೊಡನಾಗ ಬಂದೆದೆಯೂಡಿ ನೇಹದಿ ಸೋಗಿಲೊಳಗಿಟ್ಟಾಡಿಸುವಳೋ ಧನ್ಯಳೋ ಜಗದಿ।। ವನಜಗಂಧಿಯೆ ನಿನ್ನ ನುಡಿ ನಿಜ ವಿನಯ ಹೀನನ ವಿದ್ಯೆಯುಂ ನಂದನನ ಪಡೆಯದ ನರನಸಿರಿಯುಂ ಜಗದಿ ನಿಷ್ಫಲವು। ವನಿತೆ ನಾಪುತ್ರಸ್ಯಗತಿಯಂದನು ತೊರೆವು ದಾಮ್ನಾಯವದರಿಂ ತನಯರು ದಿಸಲ್ಕೊಂದುಪಾಯವ ಪೇಳ್ವೆನಾನೆಂದ।। ಪರಮಸಾವಿತ್ರಿ ವ್ರತವನಾಚರಿಸಿದರೆ ಸಂತಾನ ಲಾಭವು ದೊರಕುವುದು ನಿಜವೆಂದು ಗುರುಮುಖದಿಂದ ಕೇಳಿಹೆನು। ವಿರಚಿಸುವೆನದ ಭಕ್ತಿಯಿಂದಲೆ ತರುಣಿಕೇಳ್ ಸಾವಿತ್ರಿಯೇ ತಾಂ ಕರುಣಿಪಳು ಸಂತತಿಯ ನೀಂ ಸಂತೈಸಿಕೊಳ್ಳೆಂದ।। ಅರಸಕೇಳ್ಳೈ ಬಳಿಕಲಾ ಭೂವರನಮಲ ಸುಬ್ರಹ್ಮಚರ್ಯದೊಳಿರುತ ಕಲ್ಪೋಕ್ತಪ್ರಕಾರದೊಳುಕ್ತ ಕಾಲದೊಳು। ನಿರಶನ ವ್ರತದಿಂದ ಬಿಡದಾಚರಿಸುತಿರ್ದನು ಲಕ್ಷಹೋಮವ ನರರೆ ಸಾವಿತ್ರಿಯ ಕುರಿತು ಸಂತಾನಕಾಂಕ್ಷೆಯಲಿ।। ಆ ಮಹೀಪತಿ ತಪ್ಪದೀಪರಿ ನೇಮದಿಂದಾಚರಿಸುತಿರೇಕೇಳ್ ಸೋಮ ಕುಲಜನೆ ಕಳೆದುದ್ಯೆ ಹದಿನೆಂಟು ವರುಷಗಳು। ಆ ಮಹಾಸಾವಿತ್ರಿ ಮೆಚ್ಚುತ ಹೋಮಕುಂಡಾಂತರದಿ ತನ್ನಯ ರಾಮಣೀಯಕವಾದ ರೂಪವ ತೋರಿದಳು ನೃಪಗೆ।। ಜಯಮಹಾಸಾವಿತ್ರಿ ಜಯಜಯ ಜಯ ಜಗಜ್ಜನಯಿತ್ರಿ ಜಯಜಯ ಜಯ ಮನೋರಥದಾತ್ರಿ ಜಯಜಯ ಭಜಕಜನಧಾತ್ರಿ। ಜಯಜಯಮಹದೇವಿ ನಿನ್ನಂಘ್ರೀಯ ನುಕಂಡುಕೃತಾರ್ಥನಾದೆನು ಭಯನಿವಾರಿಣಿ ಪಾಲಿಸೆಂದೆರ ಗಿದನು ಭಕ್ತಿಯಲಿ।। ಮೆಚ್ಚಿದೆನು ನೃಪತಿತಿಲಕ ನಿನ್ನಯ ಸಚ್ಚರಿತ ಸುಬ್ರಹ್ಮಚರ್ಯಕೆ ನಿಚ್ಚಲುಂ ನೀಂ ನಡೆಸಿದೀ ಜಪಹೋಮದಾನಕ್ಕೆ। ಮೆಚ್ಚಿದೆನು ಬೇಕಾದ ವರಗಳನುಚ್ಚರಿಸು ನಾಂಕೊಡುವೆನೆನೆ ಕೇಳ್ದಚ್ಚರಿಯ ತಾಳುತ್ತ ಲಾನೃಪಗೆರಗೆತತ್ಪದಕೆ।। ತಾಯೆ ಸಂತಾನವೆ ಮನುಷ್ಯನಿ ಕಾಯಕಿಹಪರಗಳಲಿ ವಿಫುಲ ಶ್ರೇಯವನು ಮಾಡುವುದೆನುತ ಮುನಿವರರು ನುಡಿವುದರಿಂ। ಈಯಬೇಕೈ ಬಹು ಸುತರ ವರ ಗೇಯನೀಂ ದಯದಿಂದಲೆನ್ನುತ ಕಾಯಬೇಕೆಂದೆರಗಿದನು ಸಾವಿತ್ರಿಯಡಿಗಳಿಗೆ।। ಎಲೆನೃಪತಿ ನಿನ್ನಿಷ್ಟವನು ನಾಂ ತಿಳಿದಿರುವೆನ್ನೈ ಕೇಳು ನಿನ್ನಯ ಲಲನೆ ಯುದರದಳೊಂದು ಕನ್ಯಾರತ್ನವುದಿಸುವುದು। ಸಲಿಸಿರುವೆನೀ ವರವ ಮನದೊಳು ಕಳವಳಿಸ ಬೇಡೆಂದು ನುಡಿದಾ ಬಳಿಕಲಂತರ್ಧಾನವನು ಹೊಂದಿದಳು ಸಾವಿತ್ರಿ।। ವರ ಯುಧಿಷ್ಠಿರನೃಪತಿ ಕೇಳೀ ವರವ ಪಡೆದವನಶ್ವಪತಿ ಬಲು ಹರುಷದಿಂ ದಂತಃಪುರವನೊಳಹೊಕ್ಕು ಕಾಂತೆಯೊಳು। ವರದ ಪರಿಯನು ತಿಳುಹಿ ಧರ್ಮದಿ ಧರಣಿಯನು ಪರಿಪಾಲಿಸುತ ತಾ ನಿರಲತಿಕ್ರಮಿಸಿದವು ಕೆಲವು ದಿನಗಳಾ ಬಳಿಕ।। ಧರಿಸಿದಳು ಗರ್ಭವನು ತದ್ಭೂವರನಸತಿ ಸಿತಪಕ್ಷ ಚಂದ್ರನತೆರದಿ ಗರ್ಭವುದಿನ ದಿನಕ್ಕಭಿವೃದ್ಧಿಯನು ಪಡೆಯೆಹರಿಸಮಿಗೆ ನವಮಾಸ ತಂಬಲು ಶರಧಿಯೊಳು ಸಿರಿಜನಿಸಿದಂದ ದೊಳರಸಿಯುದರದಿ ಹೆಣ್ಣು ಮಗು ಹುಟ್ಟಿತು ಸುಲಗ್ನದಲಿ।। ಎಲೆನೃಪತಿಕೇಳಶ್ವಪತಿಯಾ ಬಳಿಕ ಸಾವಿತ್ರಿಯ ವರದಿ ನಿಜ ಕುಲದೊಳುದಿಸಿದ ಪುಣ್ಯಲಕ್ಷಣ ಕನ್ಯಕಾಮಣಿಗೆ। ಬೆಳೆಸಿ ಮುದದಿಂ ಜಾತಕರ್ಮವ ನಲಿವಿನಿಂ ಸಾವಿತ್ರಿಯೆಂದೇ ಲಲನೆಯಿಂದೊಡ ಗೂಡಿ ಗೆಯ್ದನು ನಾಮಕರಣವನು।।

## ಬಾರೆ ಬಾರೆ ಸಾವಿತ್ರಿ ಬಾರೆ (ಆರತಿ)

ಬಾರೆ ಬಾರೆ ಸಾವಿತ್ರಿ ಬಾರೆ ಆರುತಿಯ ಮಾಡುವೆ ಬೇಗ।।ಪ।। ಪರಮ ಪವಿತ್ರೆ ಪಾವನ ಗಾತ್ರೆ ಸುರವರ ಲೋಕದಿ ಸುಚರಿತ್ರೆ।। ಶಿವ ಭವ ಸುರಸತಿಯರು ನಿತ್ಯಪೊಗಳುತಿಹರು ನಿನ್ನಯ ಕೀರ್ತಿ।।1।। ಪತಿತ್ರಾಣವು ಸುರಸುತನವಶವಾಗಲು। ಚತುರತೆಯಿಂದ ದಾನವ ಪಡೆದ।। ಅರಿಯರೇ ಎಲ್ಲರು ನಿನ್ನ ಮಹಿಮೆಯ ನಮೋ-ನಮೋ

ಪತಿತ ಪಾವನೆ ಸದ್ಗುಣ ಸದಸಿ ಸುಜನರ ಸಲಹೆ॥2॥ ತ್ರಿಜಗದಿ ಪೂಜಿಪ ಭಜಿಪ ಜನಕೆ। ಪತಿ ಭಾಗ್ಯವ್ ನೀಡೆ ವಿಜಯ ಸಾರಥಿ॥ ವರ ಶೇಷಗಿರೀಶನ ನಿಜವಾಗಿನಂಬಿದ। ರಾಜ ಸುತೆ ಸಾವಿತ್ರಿತಾಯೆ॥3॥

## ವಿನಾಯಕ ಪೂಜಿತ ಮನಕೆ ಚಿಂತಾಮಣಿ (ವಟಸಾವಿತ್ರಿಹುಣ್ಣಿಮೆ ಕಥೆ)

ವಿನಾಯಕ ಪೂಜಿತ ಮನಕೆ ಚಿಂತಾಮಣಿ। ಮನದೊಳಿಷ್ಠಾರ್ಥ ಕೊಡುವ್ರೋಲು ಕಾಶಿಯ। ತನಯನ ಮುನ್ನ ಬಲಗೊಂಬೆ॥1॥ ಸೊಂಡಿಲ ಗಣಪನ। ಸುತನ ಮಾರ್ತಂಡನ॥ ಉದ್ದಂಡನಾಯಕ ಒಡೆಯನಾ ಕೈಯಲ್ಲಿ। ಕೊಂಡೇವು ನಾವು ಮತಿಗಳ॥2॥ ಅತ್ತಿಹಣ್ಣಿನಂತೆ। ಸುತ್ತ ಗೆಜ್ಜೆಯ ಕಟ್ಟಿ। ಚಿತ್ತಾರ ಧ್ವನಿಗೆ ನಲಿವ್ರೋನು ಕಾಶಿಯ। ವಿಶ್ವ ಮೂರ್ತಿಗೆ ನಮೋಯೆಂಬೆ॥3॥ ಆಲದ ಹಣ್ಣಿನಂತೆ। ಸಾಲುಗೆಜ್ಜೆಯ ಕಟ್ಟಿ। ತಾಳದ ಧ್ವನಿಗೆ ನಲಿವ್ರೋನು ಕಾಶಿಯ। ಕಾಲಭೈರವಗೆ ನಮೋಯೆಂಬೆ॥4॥ ನಿಂಬೆಹಣ್ಣಿನಂತೆ ತುಂಬಗೆಜ್ಜೆಯ ಕಟ್ಟಿ ತಂಬಟೆಯ ಧ್ವನಿಗೆ ನಲಿವ್ರೋನು ಕಾಶಿಯ। ಬಿಂದುಮಾಧವಗೆ ನಮೋಯೆಂಬ॥5॥ ಇಂದು ನಾಳಿನ್ನದೆ। ಒಂದೋರ್ವರರುಹದೆ। ಅಂಗನೆವ್ರೊಮ್ಮೆ ಮನವಿಟ್ಟು ಕೇಳಿದರೆ। ಬಂದಿದ್ದ ಪಾಪಗಳು ಪರಿಹಾರ॥6॥ಹೇಳು ಹೇಳೆಂದಾರೆ। ಹೇಳದಿದ್ದರೆ ಪಾಪ। ಹೇಳಿಸಿ ಕೇಳಿದವರ ಮನಸು ಪರಿಶುದ್ಧವಾದರೆ। ಬಾಗಿಲೊಳಗಿದ್ದು ಯಮ ಕಾಯ್ವ॥7॥ ನಿದ್ರೆಯ ಗೈಯ್ಯದೆ ಒಬ್ಬರ ಕೂಡೆ ಮಾತಾಡದೆ॥ ಬುದ್ಧಿಯಲಿ ಒಮ್ಮೆ ಮನವಿಟ್ಟು ಕೇಳಿದರೆ ಅ। ಲ್ಲಿದ್ದ ಪಾಪಗಳು ಪರಿಹಾರ॥8॥ ಶನಿವಾರದಮಾವಾಸ್ಯೆ। ಭರಣಿನಕ್ಷತ್ರವು। ಕರಿದನೇ ಉಟ್ಟು ಸಾವಿತ್ರಿದೇವಿ ತಾ। ಮಡದಿ ಮೈನೆರೆದಳುಪವಾಸ।9॥ ಆಗಲೇ ಸಾವಿತ್ರಿಯು। ಅಂಗಳದಲ್ಲಿ ನಿಂತಳು। ಅಂದು ಅತ್ತೆಯನ್ನು ಕರೆದು ಹೇಳಿದಳಾಗ। ಬಂದಿತು ಕಷ್ಟವೆನುತಲಿ॥10॥ ಸಾವಿತ್ರೆಯೆಂಬಾಕೆ। ಸತ್ಯಕ್ಕೆ ಹಿರಿಯೊಳು। ಅತ್ಯಂತ ತಪವ ನಡೆಸಿದನು ಸತ್ಯನು। ತಾರಯ್ಯ ಕುಶಸಮಿತ್ತವನು॥11॥ ಗಂಡಗೊಲಿದು ತಾನು। ನಿಂದದ್ದು ನೋಡೋನ। ಕಂಜಾಮುಖದ ವನಿತೆಯ ಕಂಡ್ವಿಪ್ರ। ರಂಬೆಯನು ಮನೆಗೆ ನಡೆಯೆಂದ॥12॥ ನಾಡಗೊಲಿ ತಾನು। ನೋಡಿದರೆ ಮರುಗುವನು ಬಾಡಿದ ಮುಖದ ವನಿತೆಯನು ಕುಡ್ವಿಪ್ರ। ಭಾಮೆಯನು ಮನೆಗೆ ನಡೆಯೆಂದು॥12॥ ಅತ್ತ ನನ್ನ ಕಳುಹೀರಿ। ಇತ್ತ ನೀವು ಹೋದೀರಿ। ಹಸ್ತಕನಾಣೆ ಉರಿಯಾಣೆ ನಿಮಗೆಂದ್ಳು। ಸ್ವಾಮಿಯ ಆಣೆ ನಿಮಗೆಂದ್ಳು॥14॥ ಹಾಗೆ ನನ್ನ ಕಳುಹೀರಿ। ಹೀಗೆ ನೀವು ಹೋದೀರಿ। ಪಾವಕನಾಣೆ ಉರಿಯಾಣೆ ನಿಮಗೆಂದ್ಳು॥15॥ ಅಂಜದೆ ಹೋಗೆಂದ ನಿಂದೆರಗಿ ಬಾರೆಂದ। ರಂಭೆಯನು ಮನೆಗೆ ಬರಲಟ್ಟಿ ಋಷಿಪುತ್ರ। ನಿಂಬೆಯ ಅರಗಿಲೊರಗಿದ॥16॥ ನಿಲ್ಲದೆ ಹೋಗೆಂದ। ಮೆಲ್ಲನೆ ಬಾರೆಂದ। ಭಾಮೆಯನು ಮನೆಗೆ ಬರಲಟ್ಟಿಋಷಿಪುತ್ರ। ಬಾಳೆಯ ಅರಗಿಲೊರಗಿದ॥17॥ ಚಂದ್ರಮುಖಿ ಸಾವಿತ್ರಿ। ಬಂದೊಂದು ವರ್ಷವಾಯಿತು। ಒಂದು ಬಾರಿಗೂ ನೀ ಹೋಗಲಿಲ್ಲ। ಸಾವಿತ್ರಿ ಹಾ। ಗೆಂದಳ್ಹರಿಯೊಡನೆ ಸೊಸೆ ಕೂಡೆ॥18॥ ಮೂರು ಉಪವಾಸದ। ಪಾರಣೆಯ ಮಾಡಿದೆ। ದೂರಹೋದಲ್ಲಿ ಬಳಲೀಯೆ ಸಾವಿತ್ರಿ। ಭಾನು ಉದಯಕ್ಕೆ ಉಣಬೇಕು॥19॥ ಶಾಕವನು ಮೆದ್ದು। ಸಾವಿತ್ರಿ ಪಾಕಂಗಳು ಅತ್ತೆಗೂ ಮಾವಗೂ ನಿರ್ವಿಘ್ನಸತ್ಯೆಗು॥ ಕೋವಿದಾರತಿಯ ಬೆಳಗ್ಯಾಳು॥20॥ ಅತ್ತೆ ಬಿನ್ನಪ ನಾನು। ಭರ್ತ ರೊಡನಾಡುವೆ। ಮತ್ತೀಗ ಹೋಗಿ ಉಲ್ಲಂಘಿಸದೆ ಬಹೆನೆಂದು। ಅರ್ತಿಯಿಂದ್ಹೊರಗೆ ಹೊರಟಳು॥21॥ ಮಾವ ಭಿನ್ನಪ ನಾನು ದೇವರೊಡನಾಡುವೆ। ನಾನೀಗ ಹೋಗಿ ಉಲ್ಲಂಘಿಸದೇ ಬಹೆನೆಂದು। ಬೇಗದಿಂದಾಗ ಹೊರಗ್ಹೊರಟಳು॥22॥ ಅತ್ತೆ ಆಡಿದ ಮಾತು ಭಕ್ತಿ ಬೀರುವುದಾಗಿ। ಮೇರುವೆಗಟ್ಟಿ ಗುಡಿಗಟ್ಟಿ ಸಾವಿತ್ರಿ। ಮಿತ್ರೆ ಮಾನವ ನಡಿ ಸಾಕೆ॥23॥ ಮಾವನಾಡಿದ ಮಾತು ಭಾಮೆ ಬೀರುವದಾಗಿ। ಮೆರುವೆಗಟ್ಟಿ ಗುಡಿಗಟ್ಟಿ ಸಾವಿತ್ರಿ। ಸಾಗಮಾನವ ನಡಿಸಾಕೆ॥24॥ ಮುತ್ತಿನ ತೊಡಿಗೆಯನ। ಮಿತ್ರೆತಾನು ಸಡಲಿಸಿ। ಮತಿನ್ನು ತೊಡಿಗೆಯ ತೊಡುವೆನೂ ತೊಡುವೆನೂ ಎಂದಳು। ಸಾವಿತ್ರಿ ಮನದಲ್ಲಿ ಮರುಗ್ಯಾಳು॥25॥ ಹವಳ ತೊಡಿಗೆಯನು ಹರದಿ ತಾನು ಸಡಿಲಿಸಿ। ತಿರುಗಿನ್ನು ತೊಡಿಗೆಯ ತೊಡುವೆನೆಂದಳು। ಹರದಿ ಮನದಲ್ಲಿ ಮರುಗ್ಯಾಳು॥26॥ ಚಿನ್ನದ ತೊಡಿಗೆಯನು ಕನ್ಯೆ ತಾನು ಸಡಲಿಸಿ। ಇನ್ನು ತೊಡುಗೆಯ ತೊಡುವೆನೋ ತೊಡೆನೆಂದಳು। ಕನ್ಯೆ ಮನದಲ್ಲಿ ಮರುಗ್ಯಾಳು॥27॥ ಭೂಮಿಯ ಚೇಷ್ಟೆಯು ರಾಗವಿಂತೆಯರು। ಅಹಲ್ಯಾಮಗಳೆ ಅಳದಿರೆ ಸಾವಿತ್ರಿ। ನಾ ಬಂದು ತೊಡಿಗೆ ತೊಡಿಸುವೆ॥28॥ ಕಿತ್ಲೆಯ ವನಗಳಿರ। ಕಸ್ತೂರಿಕೊಳಗಳಿರ। ಒಪ್ಪದಲಿ ಹರಿವ್ರೊ ನದಿಗಳೆ ಕಾಣೇರ। ಬಂದ ನಮ್ಮರಸು ವನಕಾಗಿ॥29॥ ನಿಂಬೆಯ ವನಗಳಿರ। ತುಂಬಿದ್ದ ಕೊಳಗಳಿರ। ಚಂದದಲ್ಲಿ ಹರಿವ ನದಿಗಳಿರ ಕಾಣೇರ। ಬಂದ ನಮ್ಮರಸು

ವನಕಾಗಿ॥30॥ ಅಡಿಕೆಯ ವನಗಳಿರ। ತುಂಬಿರುವ ಕೊಳಗಳಿರ। ಚಂದದಲ್ಲಿ ಹರಿವ ನದಿಗಳಿರಾ ಕಾಣೀರ। ಬಂದ ನಮ್ಮ ರಸು ವನಕಾಗಿ॥31॥ ಕಿತ್ಲೆ ಹಣ್ಣಿನಂತೆ ಮಿತ್ರೆ ನಿನ್ನೌವನ। ಮಿತ್ರೆಯೆನ್ನೊಡನುಡಿಯೆ ಸಾವಿತ್ರಿ ಕಿತ್ಲೇಯ ವನವು ಇದು ನೋಡು॥32॥ ನಿಂಬೆಹಣ್ಣಿನಂತೆ ರಂಬೆ ನನ್ನೌವನ ರಂಭೊಯೊನ್ನೊಡಿನುಡೆಯೇ ಸಾವಿತ್ರಿ। ನಿಂಬೆಯ ವನವು ಇದು ನೋಡು॥33॥ ಅಡಿಕೆ ಹಣ್ಣಿನಂತೆ। ಅರಸಿ ನಿನ್ನಳಿತೋಳು। ಅರಸಿಯೆ ನ್ನೊಡನುಡಿಯೆ ಸಾವಿತ್ರಿ। ಅಡಿಕೆಯ ವನವು ಇದು ನೋಡು॥34॥ ಏರಿ ಮೇಲೆ ಒಂದು ಜಾಣ ಸಿರಿಯ ಬೆಳಕು। ನೇರಿಳೆಯು ಹುಣಿಸೆ ಅರಳೀ ಅತ್ತೀ ಮರ। ಆಲದ ಮರವು ಇದು ನೋಡು॥35॥ ಕೋಡು ಕೋಡನೆ ಹತ್ತಿ। ಕಾಡು ಹಣ್ಣನೆ ಮೆದ್ದು। ಬ್ಯಾಡನ ಬ್ಯಾಡತಿ ನಲಿವಾಗ ಇಂದೆನ್ನ। ಬ್ಯಾಡನ ಬಾಳು ಕಡೆಸುಖ॥36॥ ಬ್ಯಾಡನ ತೊಡೆಮೇಲೆ। ಬ್ಯಾಡತಿ ವರಗಿಹಳು। ಇದು ನೋಡೆ ಸಾವಿತ್ರಿ ಸುಖಂಗಣೆಂದರ। ನೋಡಲಾ ಕಾಂತ ಕಡೆಗಣ್ಣಿ॥37॥ ಮುತ್ತುಗದ ಮರದ್ದುತ್ತರ ಅತ್ಯಂತ ಭೂತಿದೆ। ಇತ್ತಿತ್ತ ಬಾರೆ ನೆರಳೀಗೆ ಸಾವಿತ್ರಿ। ಮತ್ತೇನು ನಿನ್ನ ಚರಣಾವ॥38॥ ದೋಷಕ್ಕೇನು ನುಡಿಯುವದು। ಏನು ಸುಖ ಅರಸರೆ। ಶಾಕವನು ಮೆದ್ದು ಅಡವಿಲಿ ಇರಲಾಗ। ಆಕಸ್ಮಿಕ ದತ್ತನೆ ಮರವೇರಿ॥39॥ ಕಲ್ಲುಕುಣಿದಾವು ಕಳ್ಳರು ಬಂದು ಇಳಿದಾರು। ಒಳ್ಳೆಯ ಮನದಲ್ಲಿ ಮರುಗಿದನು ಸತ್ಯಾನು। ತಲ್ಲಣಿಸುತ್ತಿದ್ದಳು ಪತಿವ್ರತೆ॥40॥ ಕಾಗೆ ಕೂಗುವುದು। ಬ್ಯಾನಿಮೇಲೊರಗೋದು। ಮೇಲಿನಿಂದ ಬಂದು ಸರಳು ಹೊರಡುವದು। ಕಾಲವೆಂದತ್ತಳು ಪತಿವ್ರತೆ॥41॥ ಅತ್ತಿ ಆಲನಾಗಿ। ಮುತ್ತಕ್ಕೆ ತೆರನಾಗಿ। ಅತ್ತಿ ಸಮಿತ್ತ ಕಡಿವ್ಹೋನು ನೆತ್ತೀಲಿ। ಹತ್ತಿತು ಬೇನೆ ಘನವಾಗಿ॥42॥ ಆಲ ಆಲನಾಗಿ। ಆಲಕ್ಕೆ ಆಲನಾಗಿ। ಆಲಸಮಿತ್ತ ಕಡಿವ್ಹೋನ ನೆತ್ತೀಲಿ। ಏರಿತು ಬೇನೆ ಘನವಾಗಿ॥43॥ ಹಸುಳೆ ಕೇಳೆ ನೆತ್ತಿ। ತ್ರಿಶೂಲಗೊಳುತಿದೆ। ವಶವಲ್ಲ ಕಾಣೆ ವರಗುವ ತಲೆಬೇನೆ। ಬಿಸಿಗೀತು ಕಾಣೆ ಕಮಲಾಕ್ಷಿ॥44॥ ನಾರಿ ಕೇಳೆ ನೆತ್ತಿ ತ್ರಿಶೂಲಗೊಳುತಿದೆ। ನಾಲಿಗೆ ಬಾಯಿ ಕಳವಳಗೊಂಡವು। ಕಾಲ ದಂದತ್ತಳು ಪತಿವ್ರತೆ॥45॥ ಅಂತಕನ ಪುರದಲ್ಲಿ। ಚಿಂತೆ ಘನವಾಯಿತು। ಸದ್ಯದಲ್ಲಿ ಹೋಗಿ ತರಬೇಕು ಶೀಘ್ರದಿ। ಅತ್ಯಂತ ಯಮನು ನುಡಿದಾನು॥46॥ ತುಟ್ಟತುದೀ ಕೊಂಬು। ಮತ್ತ್ಯಾಗ್ಗೆ ಇಳಿದೀರಿ। ಉಟ್ಟ ಮುಂಜೆಂಗುಡಿ ಗಟ್ಟಿ ಸಾವಿತ್ರಿ। ಜಡೆಯನ್ನು ಕೊಟ್ಟಳರಸಾಗೆ ॥47॥ ಅತ್ತ ಹೋಗೋರಿಲ್ಲ। ಇತ್ತ ಬಾಹೋರಿಲ್ಲ। ಸೊಸ್ತಿಲ್ಲವೆಂದು ಗುರುಗಳಿಗೆ ಹೇಳೋರಿಲ್ಲ। ಎತ್ತಿಂದ ಎತ್ತ ವಿಧಿ ತಂತು॥48॥ ಹಾಗೆ ಹೋಗೋರಿಲ್ಲ ಹೀಗೆ ಬಾಹೋರಿಲ್ಲ। ಹೀಗಾಯಿತೆಂದು ಗುರುಗಳಿಗ್ಹೇ ಳೋರಿಲ್ಲ। ಹ್ಯಾಗೆಂದಿದ್ದಾಗೆ ವಿಧಿ ತಂತು॥49॥ ನೂರಿಬ್ರ ತಾಯರಿಗೆ। ಒಬ್ಬಳು ಮಗಳೇ ನಾನು। ಒಬ್ಬನು ಇಲ್ಲಿ ಸ್ಮ ೃತಿಯ ಕಾಣೆನೆಂದ್ಳು। ವ್ಹೋರ್ವಿಷ್ಟಿ ಶೋಕ ಪಡುತ್ತಿದ್ಲು॥50॥ ಎಲ್ಲಿ ತಾಯಿ ತಂದೆ। ಎಲ್ಲಿಯ ಸೋದರ ರೆಲ್ಲಿ ಬಂಧು ಬಳಗವು ಶ್ರೀಫುಲ್ಲನಾಭನ ಮನದಿ ನೆನೆದಿರಿ॥51॥ ಯಾವ ತಾಯಿ-ತಂದೆ ಯಾವ ಸಹೋದರ। ಯಾವ ಬಂಧು-ಬಳಗವು। ಶ್ರೀನಾರಾಯಣ ನೆನೆದಿರಿ॥52॥ ಕಾರಾವಳಿಯನುಟ್ಟು। ಕಗ್ಗಟ್ಟಿನ ಬೊಟ್ಟನಿಟ್ಟು। ಕಾಳ ನಾಯ್ಗಳ ನೊಳಗೊಂಡು ಚೋರರು ಘೋರನೆ ಬಂದರಡವೀಗೆ॥53॥ ತೆಂಕಣ ಬಾಗಿಲಲಿ। ಬಿಂಕದಲಿ ಬಂದರು। ಬಿಂಕದಲ್ಲಿರುವ ಪತಿವ್ರತೆಯನೆ ಕಂಡು। ಬಿಂಕದಿಂದ್ಹೋದರು ಯಮಚಾರರು॥54॥ ಮೂಡಣ ಬಾಗಿಲಲಿ। ಗಾಢದಲಿ ಬಂದರು। ನೋಡುತ್ತಲಿರುವ್ಹೊ ಪತಿವ್ರತೆಯನೆ ಕಂಡು। ನೋಡುತಲ್ಹೋದರು ಯಮಚಾರರು॥55॥ ಯಮನ ಕಾಣುತಲಂಜಿ। ಗಡಗಡನೆ ನಡುಗುತ್ತ। ಹಿರಿಯಣ್ಣನೀಗ ರಥವೆ ತರಲಾಗದು। ಪ್ರತಿಷ್ಠೆ ಗೈದಾಳು ಪತಿವ್ರತೆ॥56॥ ತರಲಾರೆವೆಂದರೆ ಉರಿಯ ಬಿದ್ದೆ ಯಮರಾಯ। ಕರಿಯ ಬಣ್ಣಗಳ ತೆಗೆದುಟ್ಟ ವೇಷಾಂಗಿ। ಪರಮೇಷ್ಠಿತೊಟ್ಟು ಹೊರಗ್ಹೊರಟ॥57॥ ಅಂಬರದ ಯಾನವಳು। ಇಳಿದನೇ ಯಮರಾಯ। ನಿಂದಿದ್ದ ಸತಿಯು ನಿಂದಿರ್ಪುದ ಕಂಡು। ಬಂದೋರ್ಯಾರೆಂದು ಬೆಸಗೊಂಡಳು॥58॥ ಯಾಕತ್ತೆ ಎನ್ನ ತಂದೆ। ಮಾರ್ತಂಡಳೆನ್ನ ಪ್ರಿಯಳೆ। ಲೋಕದ ಮೇಲುಳ್ಳ ಮನುಷ್ಯರಾಪ್ರಾಣವನು। ನೂಕಿ ಕೊಂಡೋಗ್ವ ಯಮ। ನಾನು॥59॥ ತೊಡೆಯ ಮೇಲುಳ್ಳರಸನ್ನ। ಪೊಡವಿಮೇಲಿಟ್ಟಳು। ಪೊಡವಿಮೇಲುಳ್ಳ ಪತಿವ್ರತೆ ಸಾವಿತ್ರಿ। ಪೊಡವೊಟ್ಟು ತನ್ನ ಪಿತನಿಗೆ॥60॥ ಮುತ್ತೈ ದೆಯಾಗೆಂದು। ಅಂತಕಪ್ಪನ್ಹರಸೀದ। ಇಂದಿನಾ ವಚನ ಖರೆಯಲ್ಲೆ ಎನುತಾಳೆ। ಸೆರಗು ಗಂಟಕ್ಕಿ ನಡೆದಾಳು॥61॥ ತೂಗಿ ನೋಡಿದಾಳಾಗ ಮೂಗಿನ ಸ್ವರ ಕಾಣದೆ। ಯಾವಾಗ ಹೋಯಿತೊ ಅರಿಯಳೋ ಸತ್ಯನ। ಆಯುಷ್ಯಾವ ತರುವೆ ಯಮನಲ್ಲಿ॥62॥ ಖಂಡುಗ ರಾಜ್ಯವನು ಉಂಡಲಿಗೆ ನೀಯುವೆ। ಪಾಂಡಿತ್ಯನುಳ್ಳ ಪುರುಷನ ಪ್ರಾಣವನು। ಕೊಂಡು ಬಂದಿಲ್ಲಿ ಪ್ರಿಯೆ ಮಾಳ್ಪೆ॥63॥ ಹರಿಣ ಸಾರಂಗ। ಮೃಗಕೋಡಂಗ। ನೀವೆಲ್ಲ ಬಂದು ಅರಸನ್ನ ನೋಡಿದರೆ। ನಾನೀಗ ಶಾಪ ನಿಮಗೀವೆ॥64॥ ದೂರ ಹುಲಿ ಮೃಗ ಸಾರಂಗ ಕೋಡಂಗ। ನೀವೆಲ್ಲ ಬಂದು ಅರಸನ್ನ ನೋಡಿದರೆ। ನಾನೀಗ ಶಾಪ

ನಿಮಗೀವೆ।।65।। ಎಡದ ಕೈಯಲ್ಲಿ ಹಣತೆ। ಬಲದ ಕೈಲಿ ರಂಗೋಲಿ। ಹಲವು ದೇವಾಲಯ ತಿರುಗಲಾರೆ ಸರ್ವೇಶ। ಬಂದೇನು ನಿನ್ನ ಬಳಿಗೆಂದಳು ।।66।। ಒಪ್ಪೊತ್ತು ಉಣಲಾರೆ। ಇಪ್ಪೊತ್ತು ಮೀಲಾರೆ। ಸತ್ಯನಾ ಬಿಟ್ಟು ಇರಲಾರೆ ಸರ್ವೇಶ ಬಂದೇನು ನಿನ್ನ ಬಳಿಗೆಂದಳು।।67।। ಒಂದೊತ್ತು ಉಣಲಾರೆ ಒಂದೆಲೆಯನ್ನಾಕಲಾರೆ। ಗಂಡನಾ ಬಿಟ್ಟು ಇರಲಾರೆ ಸರ್ವೇಶ ಬಂದೇನು ನಿನ ಬಳಿಗೆಂದಳು।।68।। ಹಾಲು ಕೋಯೆಂದಾರೆ ಹಾಸಿದಳೆ ಮುಂಜೆರಗ। ಹಾಲಿಕ್ಕಂದಗಳ ಕೊಡಬೇಕು ನೀವು ಕೊಟ್ಟ। ಬಾಲನಾ ಯಾರಿಗೆ ಪಡೆಯಲಿ।।69।। ಮೊಸರು ಕೋಯೆಂದರೆ ಹಾಸಿದಳೆ ಮುಂಜೆರಗ। ಯೊಸರಿಕ್ಕಂದಗಳ ಕೊಡಬೇಕು ನೀವು ಕೊಟ್ಟ। ಶಿಶುವ ನಾನ್ಯಾರಿಗೆ ಪಡೆಯಾಲಿ।।70।। ಏರೀರಾಜನ ನೀರಿಲ್ಲದೆ ಬೆಳೆವೋರು। ರಾಯ ನಿಮ್ಮೊಡನೆ ವನವಾಸವಿರುವಾಗ। ಬಾಲಾನ ನಾನಾರಿಗೆ ಪಡೆಯಾಲಿ।।71।। ಬೆಟ್ಟದ ರಾಜನ ಬಿತ್ತೋರೆ ಬೆಳಗೋರೆ। ರಾಯ ನಿಮ್ಮೊಡನೆ ವನವಾಸವಿರುವಾಗ। ಶಿಶುವ ನಾನ್ಯಾರಿಗೆ ಪಡೆಯಾಲಿ।।72।। ಗಂಡನಿಲ್ಲದೆ ಬಾಲೆ ಉಂಡುಟ್ಟು ಇದ್ದರೆ। ನಿಂದು ಕಂಕಣವು ನೆರೆದು ಇಟ್ಟಿದ್ದರೆ। ಕಂಡೋರೆಲ್ಲಾ ನಗುವೋರು।।73।। ಅರಸಿನುಳ್ಳೋಳ ಕಂಡಾರೆ। ಅರಿಶಿನ ಹಚ್ಚೆಂಬೋರು। ಅರಸನಿಲ್ಲಾದ ವಿಧವೆಯ ಕಂಡಾರೆ। ಚರಿತಳೆ ಬಾನು ಬಸಿಯೆಂಬೋರು।।74।। ಅತ್ತೆಗು ನಾದ್ನಿಗು ತೊತ್ತಾಗಿ ನುಡಿದರೆ। ತುತ್ತು ನುಂಗುವಾಗ ಮಿಡುಕುವಳು ತಾ ತನ್ನ। ನೆತ್ತಿಲಿ ಹೊತ್ತು ಇಳಿಸೆಂಬೋರು।।75।। ಅತ್ತೆಗೂ ನಾದ್ನಿಗೂ ತೊತ್ತಾಗಿ ನುಡಿದರೆ ಕೂಳ ನುಂಗುವಾಗ ಮಿಡುಕೋಳು ತಾ ತನ್ನ ಬೀದೀಲಿ ಹೊತ್ತು ಇಳುವೆಂಬೋರು ।।76।। ನೀನಾಡಿದ ಮಾತು। ತಪ್ಪೋದು ಹುಸಿಯಲ್ಲ। ಮೆಚ್ಚಿದೆನು ಕಾಣೆ ವರ ಬೇಡೆ ಸಾವಿತ್ರಿ। ಸತ್ಯನ ಪ್ರಾಣ ಹೊರತಾಗಿ।।77।। ಕಂಗಳಿಲ್ಲದ ಅಂಧಕ। ಮಾವಂದಿರಿಗೆ। ಕಂಗಳು ನೀವು ಕೊಡಬೇಕು ಸರ್ವೇಶ। ರಂಭೆ ತಾ ಕರವ ಮುಗಿದಾಳು।।78।। ಪುತ್ರನಿಲ್ಲದ ಪುತ್ರೀಗೆ। ಎನ್ನಯ್ಯಾ। ಪುತ್ರನ್ನ ನೀವು ಕೊಡಬೇಕು ಸರ್ವೇಶ ಮಿತ್ರೆ ತಾ ಕರವ ಮುಗಿದಾಳು।।79।। ಹೊನ್ನ ಡಳಿಗೆಯಲಿ। ಹೊಯಿದನೆ ಆಯುಷ್ಯಾವ। ಸಾವಿತ್ರಿ ದೇವಿ ಹಿಡಿಯೆಂದು ಯಮರಾಯ। ಹೊನ್ನೋಲೆ ಹರಿಸಿ ಕಿವಿಗಿಟ್ಟ।।80।। ಬಾಳು ಬಳ್ಳಾಳು ಏರಿದನೆ ರಥಗಳ। ದಾರಿಯನು ತೋರದಿರೆ ಯಮಧರ್ಮ ಬಿಟ್ಟೇನು। ತೋರಿ ನೀ ರಥಕ್ಕೆ ಬಳೆಸೆಂದ್ನು।।81।। ಅಕ್ಕ ಕೇಳೆ ಸಾವಿತ್ರಿ। ನಾ ನಿನಗೆ ಪ್ರಿಯನೆ ಮಾಳ್ಪೆ। ಸೃಷ್ಟಿ ಮೇಲುಳ್ಳ ಮನುಷ್ಯರಿಗೆ ದಾರಿಯನು। ನಮ್ಮಕ್ಕನೀ ತೋರದಿರು ಕಂಡ್ಯ।।82।। ತಾಯಿ ಕೇಳೆ ಸಾವಿತ್ರಿ। ನಾನೀಗ ಪ್ರಿಯಾಳ್ಪೆ। ಭೂಮಿಯ ಮೇಲುಳ್ಳ ಮನುಷ್ಯರಿಗೆ ದಾರಿಯನು। ನಮ್ಮ ತಾಯೀ ನೀ ತೋರದಿರು ಕಂಡ್ಯ।।83।।ತಂಗಿ ಕೇಳೆ ಸಾವಿತ್ರಿ ನಾ ನಿನಗೆ ಪ್ರಿಯವ ಮಾಳ್ಪೆ। ಸೃಷ್ಟಿ ಮೇಲುಳ್ಳ ಮನುಜರಿಗೆ। ದಾರಿಯನು ನಮ್ಮ ತಂಗೀ ನೀ ತೋರದಿರು ಕಂಡ್ಯ।।84।। ಎಡದ ಕೈಲಿ ಹಣತೆ। ಬಲದ ಕೈಲಿ ಆಯುಷ್ಯವು। ಸಾವಿತ್ರಿ ದೇವಿ ತರಲಾಗ ಸತ್ಯನು। ತಾನಾಗ ಮೈಯ ಮುರಿದ್ದೆದ್ದ।।85।। ನಾರಿ ಕೇಳು ಸಾವಿತ್ರಿ। ನಾನಿರುಳು ಕನಸಿನಲಿ। ಯಮನವರು ಬಂದು ಕರವ ಪಿಡಿದೆಳೆವಾಗ। ನೀಯೆನ್ನ ಬಿಡಿಸಿಕೊಳುತಿರ್ದೆ।।86।। ನಿನ್ನಂತೆ ನಡಿವೋಳು। ನಿನ್ನಂತೆ ನುಡಿವೋಳು। ನಿನ್ನೋಲುವ ಮಿಡುಗೆಸೆದ ಬಾಲೆ। ಎನ್ನ ಕರ ಪಿಡಿದು ತರುವೋಳು।।87।। ಇಂದಿನ ಕನಸು ಮತ್ತೆಲ್ಲ ಒಳ್ಳೇದು ಇನ್ನಿಲ್ಲೀಗ ಇರಲಾರದ ಋಷಿವಳ್ಳಿ। ಅಲ್ಲಿಗ್ಹೋಗೋಣ ನಡಿಯೆಂದಳು।।88।। ದೂರದ ಹುಲಿ ಮೃಗ ಸಾರಂಗ ಕೋಡಂಗ। ತಾವೆಲ್ಲ ಬಂದು ಕಳುಹಿಸಿದವು ಸಾವಿತ್ರಿಯ। ಗ್ರಾಮದಾಹಳ್ಳಿವಳಗಾಗಿ।।89।। ಹಂದಿ ಸಾರಂಗ ಮೃಗ ಕೋಡಂಗ। ತಾವೆಲ್ಲ ಬಂದು ಕಳುಹಿದವು ಸಾವಿತ್ರಿಯ। ಗ್ರಾಮದಾ ಹಳ್ಳಿವಳಗಾಗಿ।।90।। ಉತ್ತಮೋತ್ತಮ ತೀರ। ಉತ್ತಮಾ ಕುಲಕ್ಷೇತ್ರ। ಸತ್ಯಪ್ಪ ಬಂದು ಗುಡಿ ಕಟ್ಟಿ ಎನುತಾಲೆ। ಹಕ್ಕಿಗಳು ತಾವು ನುಡಿದವು91।। ಅರಗಿಳಿ ನುಡಿದಂತೆ ತಳಿರು ತೋರಣ ಕಟ್ಟ। ಬಾಸಿಂಗ ಕಟ್ಟಿ ಗುಡಿ ಕಟ್ಟಿ ಯೆನುತಾಲೆ। ಶೇಷಪತಿ ಬರುವೋಭರವೀಗ।।92।। ಮಾನಪ್ಪ ಕಂಗಳಿರ ನೀವೇನೆನುತ್ತೀರಿ। ಮಾನಪ್ಪನೆಂಬ ಹಿರಿಯ ಮಗನ್ಹೋದ ಸೊಸೆ ಹೋದಳು। ನೀವೇನನುತ್ತೀರಿ ಬರಿಮಾತು।।93।। ದರ್ಭೆ ಸಮಿತ್ತವನು। ಧರೆಯ ಮೇಲಿರೀಸಿದ। ಹೆತ್ತೋರ ಚರಣಕ್ಕೆರಗಿದ ಹಸುಕೂಸನೆ ಕಂಡು। ಇಪ್ಪೋರೆ ಮಗನ ಅಡವೀಲಿ।।94।। ಅರಣ್ಯದಡವೀಲಿ। ನಾನೊಬ್ಬನೇ ಇದ್ದೆ। ನಾನೊಂದು ತೆರವ ಅರಿಯೆನು ನೀವು ನಿಮ್ಮ। ಭೂನಾಥ ಸೊಸೆಯ ಬೆಸಗೊಳ್ಳಿ।।95।। ಪಾಪ ಹರಿದವು ನಮಗೆ। ಯಮಧರ್ಮ ಕಣ್ಣು ತೆರೆದ। ನಿಮ್ಮ ಪಾದವು ನೆನೆದ ಕಾರಣದಿಂದ। ನಮ್ಮ ಕಾರ್ಯಗಳು ಜಯವಾಯಿತು।।96।। ಸಾವಿತ್ರಿ ದೇವೀನ ಸತ್ಯಪ್ಪ ಹರಸೀದ। ಪತ್ರದಲ್ಲೇ ಇದು ಹೇಳೋರಿಗೆ ಕೇಳೋರಿಗೆ। ವಿಷ್ಣು ಲೋಕದಲ್ಲಿ ಸುಖವಿತ್ತರು।।97।। ಶನಿವಾರದಮಾವಾಸ್ಯೆ। ಹೇಳೋರಿಗೆ ಕೇಳೋರಿಗೆ। ಮುತ್ತೈದೆತನ ಕೊಡುವೋಳು ಸಾ। ವಿತ್ರಿ ದೇವಿ ಸ್ಥಿರವಾಗಿ।।98।।

